# ಸಮನ್ವಯ ಮತ್ತು ಸಮಾಜೋ-ಭಾವನಾತ್ಮಕ ಯೋಗಕ್ಷೇಮ

ಮೈಥಿಲಿ ಕೆ.

ವಿಭಾಗ

ನಾನು ಈ ಲೇಖನದಲ್ಲಿ, ತರಗತಿಯಲ್ಲಿ ಸಮನ್ವಯಗೊಳ್ಳುವ ಅವಕಾಶಕ್ಕಾಗಿ ಕಾಯುತ್ತಿರುವ, ಬೆಳವಣಿಗೆಯ ವೈಕಲ್ಯತೆಯನ್ನು ಹೊಂದಿರುವ ವಿದ್ಯಾರ್ಥಿಯ ಸಾಮಾಜಿಕ ಮತ್ತು ಭಾವನಾತ್ಮಕ ಯೋಗಕ್ಷೇಮಕ್ಕೆ ಅವಕಾಶ ಕಲ್ಪಿಸುವುದರಲ್ಲಿ ಇರುವ ಬೋಧನಾ ವಿಧಾನಗಳು ಮತ್ತು ಇದನ್ನು ಸಾಧಿಸುವುದರಲ್ಲಿ ಸಹಪಾಠಿಗಳು ಹೊಂದಿರುವ ಪಾತ್ರದ ಮೇಲೆ ಬೆಳಕು ಚೆಲ್ಲುತ್ತೇನೆ.

## ಸಂದರ್ಭ

ಕೋವಿಡ್ ಪಿಡುಗಿನ ನಂತರ, ಪ್ರಪಂಚದ ಹೆಚ್ಚಿನ ಭಾಗವು ಆನ್ಲೈನ್ ಬೋಧನೆ–ಕಲಿಕೆಗೆ ಹೊಂದಿಕೊಳ್ಳಲು ಯತ್ನಿಸಿದರೆ, ನಾವು ಗ್ರಾಮ ಪಂಚಾಯತಿ ಗ್ರಂಥಾಲಯಗಳೊಂದಿಗೆ ಪರ್ಯಾಯ ವಿಧಾನವನ್ನು ಪ್ರಯತ್ನಿಸಿದೆವು. ಇದು, ಆ ಪಂಚಾಯತಿ ಗ್ರಂಥಾಲಯದ ಐದು ಕಿಲೋಮೀಟರ್ ವ್ಯಾಪ್ತಿಯೊಳಗಿರುವ ಶಾಲೆ ಮತ್ತು ಶಾಲಾ ಮಕ್ಕಳನ್ನು ಸಂಪರ್ಕಿಸಲು ಇದ್ದ ಸರಳವಾದ ಮಾದರಿಯಾಗಿತ್ತು. ನಾವು ಪ್ರತಿ ದಿನವೂ ಎಲ್ಲಾ ವಯೋಮಾನಗಳ ವಿದ್ಯಾರ್ಥಿಗಳನ್ನು ಭೇಟಿಯಾದೆವು ಹಾಗೂ ಕೆಲವು ಗಂಟೆಗಳ ಕಾಲ ಅವರೊಂದಿಗೆ ತೊಡಗಿಸಿಕೊಂಡೆವು. ಈ ಸಂದರ್ಭದಲ್ಲಿ ವಿಷಯಗಳ ಅನುಭವಕತ್ಮಕ ಅಂಶಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಯಿತು. ಅವೆಂದರೆ, ವಸ್ತುಗಳ ಭೌತಿಕ ಗುಣಲಕ್ಷಣಗಳನ್ನು ಮುಟ್ಟುವುದು ಮತ್ತು ಅನುಭವಿಸುವುದು; ಮಾದರಿಗಳು ಮತ್ತು ಪ್ರಕ್ರಿಯೆಗಳನ್ನು ನೋಡುವುದು – ಹಸಿರು ಮತ್ತು ಕೆಂಪು ಪ್ರಾಥಮಿಕ ಬಣ್ಣಗಳನ್ನು ಬೆರೆಸಿದಾಗ, ಬಳಸಿದ ಬಣ್ಣಗಳ ಪ್ರಮಾಣವನ್ನು ಆಧರಿಸಿ ಕಂದು ಬಣ್ಣದ ಶ್ರೇಣಿಯನ್ನು ಅವರು ಹೇಳಬಹುದು; ಬಣ್ಣಗಳೊಂದಿಗೆ ಆಟವಾಡುವುದು, ಬೆರಳಚ್ಚುಗಳು, ತರಕಾರಿಗಳು ಮತ್ತು ಎಲೆಯ ಮುದ್ರೆಗಳನ್ನು ರಚಿಸುವುದು; ನಗುವುದು, ನೆಗೆಯುವುದು, ಓಡುವುದು ಮುಂತಾದ ದೈಹಿಕ ಚಟುವಟಿಕೆಗಳನ್ನು ಮಾಡುವುದು ಹಾಗೂ ಇದರ ನಂತರ ಅವರಿಗೆ ಬಾಯಾರಿಕೆಯಾಗುತ್ತದೆ ಎನ್ನುವುದನ್ನು ಅರಿತುಕೊಳ್ಳುವುದು; ಪ್ರಶ್ನೆಗಳನ್ನು ಕೇಳುವುದು ಮತ್ತು ಸಂಭಾವ್ಯ ಉತ್ತರಗಳ ಕುರಿತು ಪರ್ಯಾಲೋಚಿಸುವುದು ಮತ್ತು ಲಘುವಾದ ಮತ್ತು ಆನಂದಿಸಬಹುದಾದ ವಾತಾವರಣದಲ್ಲಿ ಒಡನಾಟ ರೂಪಿಸುವುದು – ಹೀಗೆ ಸಾಕಷ್ಟು ಯೋಚನೆಯನ್ನು ಒಳಗೊಂಡಿರುವ ಅರಿವಿನ ಕ್ರಿಯೆಗಳು ಇತ್ಯಾದಿ. ಇದು ಕಲಿಕೆ ಮತ್ತು ಚೇತರಿಕೆ ಹಂತದ ಆರಂಭವಾಗಿರುವುದರಿಂದ, ಒಂದನೇ ತರಗತಿಯಿಂದ ಏಳನೇ ತರಗತಿಯ ತನಕ ಭಾಷೆ ಮತ್ತು ಗಣಿತದ ಚಟುವಟಿಕೆಗಳನ್ನು ನಡೆಸಲಾಯಿತು. ಉಜ್ಜಿನಿಯ ಗ್ರಾಮ ಪಂಚಾಯತಿ ಗ್ರಂಥಾಲಯದ ಸುತ್ತ ಇರುವ ಮೂರು ಶಾಲೆಗಳ ಶಿಕ್ಷಕರೊಂದಿಗೆ ಸೇರಿ ನಾವು ಒಂದು ವೇಳಾಪಟ್ಟಿಯನ್ನು ಸಿದ್ಧಪಡಿಸಿದೆವು. ಇದು ಕೇವಲ ಬುನಾದಿ ಸಾಕ್ಷರತೆ (foundational Literacy) ಮತ್ತು ಸಂಖ್ಯಾಜ್ಞಾನದ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲಿತು. ಅಜೀಂ ಪ್ರೇಮ್‌ಜಿ ಫೌಂಡೇಷನ್ ಸಿದ್ಧಪಡಿಸಿದ ಕಾರ್ಯಹಾಳೆಗಳು (worksheets) ಆಕರವಾಗಿ ಕಾರ್ಯನಿರ್ವಹಿಸಿದವು. ಒಂದು ನಿರ್ಧರಿತ ದಿನದಂದು ನಾವು ಈ ಚಟುವಟಿಕೆಗಳಿಗೆ ಯೋಜನೆ ರೂಪಿಸಿದೆವು: ಪ್ರತಿ ಮಗುವಿನ ಅಚ್ಚುಮೆಚ್ಚಿನ ಸ್ಥಳದ ಚಿತ್ರ ಬಿಡಿಸುವುದು/ಬಣ್ಣ ಹಚ್ಚುವುದು, ಕಥೆ ಬರೆಯುವುದು, ಚಿತ್ರವನ್ನು ಓದುವುದು ಮತ್ತು ಗಟ್ಟಿಯಾಗಿ ಓದಿದ ನಂತರ ಎಣಿಕೆಯ ಚಟುವಟಿಕೆಗಳನ್ನು ಕೈಗೊಳ್ಳುವುದು.

ಚಿತ್ರ ಬಿಡಿಸುವ ಚಟುವಟಿಕೆಯಲ್ಲಿ ಹೆಚ್ಚಿನ ಮಕ್ಕಳು ತಮ್ಮ ಶಾಲೆಯ ಚಿತ್ರವನ್ನು ಬಿಡಿಸಿದರು. ಇನ್ನು ಕೆಲವರು ತಮ್ಮ ಮನೆಗಳ ಚಿತ್ರಗಳನ್ನು ಬಿಡಿಸಿದರು. ಎಣಿಕೆಯ ಚಟುವಟಿಕೆಗಳ ಅಂಗವಾಗಿ ನಾವು ಪುಸ್ತಕದಲ್ಲಿದ್ದ ಸಣ್ಣ ಪ್ರಮಾಣಗಳನ್ನು ಗುರುತಿಸುವುದರ ಮೂಲಕ ಪ್ರಾರಂಭಿಸಿ ದೊಡ್ಡ ಪ್ರಮಾಣಗಳತ್ತ ಸಾಗಿದೆವು. ಈ ಚಟುವಟಿಕೆಯನ್ನು ಒಂದರಿಂದ ಮೂರನೇ ತರಗತಿಯ ತನಕದ 14 ನಲಿಕಲಿ ವಿದ್ಯಾರ್ಥಿಗಳಿಗಾಗಿ ರೂಪಿಸಲಾಗಿತ್ತು. ಎಣಿಕೆಗಾಗಿ ನಾವು ಕೆಲವೊಂದು ಮೂರ್ತ ವಸ್ತುಗಳನ್ನು ಆರಿಸಿದೆವು ಮತ್ತು ಚಿತ್ರಗಳತ್ತ ಸಾಗಿದೆವು. ನಂತರ ಚಿತ್ರಗಳಲ್ಲಿ ಉಲ್ಲೇಖಿಸಿದ ಪ್ರಮಾಣಗಳನ್ನು ಸಮಾನ ಸಂಖ್ಯೆಯ ವಸ್ತುಗಳೊಂದಿಗೆ ಹೊಂದಿಕೆ ಮಾಡಿದೆವು. ನಂತರ ನಾವು ಗ್ರಂಥಾಲಯದ ಪ್ರವೇಶ ದ್ವಾರದ ಬಳಿ ಸಾಗಿದೆವು. ಮೆಟ್ಟಿಲುಗಳನ್ನು ಹತ್ತುವುದು ಮತ್ತು ಕೆಳಗೆ ಇಳಿಯುವುದು ಆ ರೀತಿ ಮಾಡುವಾಗ ಅವುಗಳನ್ನು ಎಣಿಸಿದೆವು. ಮೆಟ್ಟಿಲ ಸಾಲುಗಳ ಮೊದಲ ಪಂಕ್ತಿಯಲ್ಲಿ ಹತ್ತು ಮೆಟ್ಟಿಲುಗಳಿದ್ದರೆ ಮುಂದಿನ ಪಂಕ್ತಿಯಲ್ಲಿಯೂ ಹತ್ತು ಮೆಟ್ಟಿಲುಗಳಿದ್ದವು. ಮೇಲೆ ಸಾಗುವಾಗ ಮಕ್ಕಳು ಮೆಟ್ಟಿಲುಗಳ ಸಂಖ್ಯೆಯನ್ನು ಎಣಿಸುತ್ತಿದ್ದರು. ಕೆಳಕ್ಕೆ ಬರುವಾಗ ಹಿಮ್ಮೊಗವಾಗಿ ಎಣಿಕೆ ಮಾಡುತ್ತಿದ್ದರು. ಅವರು ಇದನ್ನು ಎರಡರ ಮತ್ತು ಮೂರರ ಗುಣಕದಲ್ಲಿ ಮಾಡಿದರು. ಅಂತಿಮವಾಗಿ ಒಬ್ಬ ವಿದ್ಯಾರ್ಥಿಯು ಯಾವುದಾದರೂ ಒಂದು ಮೆಟ್ಟಿಲಿನ ಮೇಲೆ ನಿಲ್ಲುತ್ತಿದ್ದ ಹಾಗೂ ಉಳಿದವರು ಅದರ ಸಂಖ್ಯೆಯನ್ನು ಹೇಳುತ್ತಿದ್ದರು. ಮಕ್ಕಳ ಸ್ಥಾನ ಸೂಚಕ (ordinality) ಮತ್ತು ಮೂಲಾಂಕಗಳ (cardinality) ಗುರುತಿಸುವಿಕೆಯ ಸಾಮರ್ಥ್ಯವನ್ನು ವೃದ್ಧಿಸುವ ಉದ್ದೇಶವನ್ನು ಈ ಚಟುವಟಿಕೆಯು ಹೊಂದಿತ್ತು.

ನನ್ನ ತರಗತಿಯಲ್ಲಿ ರೂಬಿ* ಎನ್ನುವ ಮಗು ಇದ್ದಳು. ಪ್ರತಿ ದಿನವೂ ಆಕೆ ಚಟುವಟಿಕೆಯಲ್ಲಿ ಪಾಲ್ಗೊಳ್ಳುತ್ತಿದ್ದಳು. ಆದರೆ

ಪ್ರತ್ಯೇಕವಾಗಿಯೇ ಉಳಿಯುತ್ತಿದ್ದಳು. ಆಕೆ ಹೆಚ್ಚು ಮಾತನಾಡುತ್ತಿರಲಿಲ್ಲ ಹಾಗೂ ಆಕೆಯ ಬೆಳವಣಿಗೆ ಸ್ವಲ್ಪ ಕುಂಠಿತವಾಗಿದೆ ಎಂದು ಆಕೆಯ ಸಹಪಾಠಿಗಳು ಮತ್ತು ಶಾಲೆಯ ಶಿಕ್ಷಕರು ತಿಳಿಸಿದ್ದರು. ಇತರ ಚಟುವಟಿಕೆಗಳಿಗಾಗಿ ನೀಡಿದ ಸೂಚನೆಗಳನ್ನು ಆಕೆ ಕೇಳಿಸಿಕೊಳ್ಳುತ್ತಿದ್ದಳು ಹಾಗೂ ಆಕೆ ತಾನಾಗಿಯೇ ಕೆಲವೊಂದು ಚಿತ್ರ ಅಥವಾ ರೇಖಾಚಿತ್ರ ಬಿಡಿಸುವ ಕೆಲಸವನ್ನು ಮುಂದುವರಿಸುತ್ತಿದ್ದಳು. ಆಕೆ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ನಿರಾಕರಿಸಿದಳು ಮತ್ತು ಇತರರ ಚಟುವಟಿಕೆಗಳನ್ನು ನೋಡುವುದರಲ್ಲಿಯೇ ನಿರತಳಾದಳು. ಆದರೆ ಒಂದು ದಿನ ಹಠಾತ್ ಆಗಿ ರೂಬಿ ಹೀಗೆ ಹೇಳಿದಳು: 'ಏರಿಕೆ ಇಳಿಕೆ ಕ್ರಮ.' ಇದು ಇತರ ಮಕ್ಕಳ ಆಸಕ್ತಿಯನ್ನು ಕೆರಳಿಸಿತು. ಆಕೆ ಏನನ್ನು ಹೇಳುತ್ತಿದ್ದಾಳೆ ಎಂದು ಆಕೆಯನ್ನು ಈ ಮಕ್ಕಳು ಕೇಳಿದರು,

ಮೆಟ್ಟಿಲನ್ನು ತೋರಿಸಿದ ರೂಬಿಯು, 'ಇದು ಏರಿಕೆ ಇಳಿಕೆ ಕ್ರಮ' ಎಂದು ಹೇಳಿದಳು. ಇನ್ನೊಬ್ಬ ವಿದ್ಯಾರ್ಥಿಯು ಸಂತಸದಿಂದ ಕುಣಿದಾಡಿದ ಹಾಗೂ ಹೇಳಿದ: 'ಹೌದು ಮಿಸ್, ಆಕೆ ಸರಿಯಾಗಿಯೇ ಹೇಳುತ್ತಿದ್ದಾಳೆ!'

ಮತ್ತೊಬ್ಬ ವಿದ್ಯಾರ್ಥಿನಿ ವಿವರಿಸಿದಳು: 'ಮೆಟ್ಟಿಲಿನಿಂದ ಇಳಿಯುವುದು ಎಂದರೆ ಇಳಿಕೆ ಕ್ರಮಾಂಕ, ಹಾಗೂ ಹತ್ತುವುದು ಎಂದರೆ ಏರಿಕೆ ಕ್ರಮಾಂಕ!'

ಮೆಟ್ಟಿಲುಗಳನ್ನು ಹತ್ತುವ ಕ್ರಿಯೆಯ ಮೂಲಕ ರೂಬಿಯು ವಿವರಿಸಿದಳು: '1, 2, 3… ಎಣಿಸಿ'

ರೂಬಿಯು ಮಾತನಾಡುವಾಗ ಸಮಸ್ಯೆಗಳನ್ನು ಎದುರಿಸುತ್ತಿದ್ದಳು. ಹೀಗಾಗಿ ಆಕೆಯ ಮಾತುಗಳನ್ನು ಅರಿತುಕೊಳ್ಳುವುದು ನನ್ನ ಪಾಲಿಗೆ ಕಷ್ಟಕರವಾಗಿತ್ತು. ಆದರೆ ಆಕೆಯ ಸಹಪಾಠಿಗಳು ಆಕೆಯ ಮಾತುಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಿದ್ದರು. ಏಕೆಂದರೆ ತರಗತಿಯ ಒಳಗೆ ಹಾಗೂ ಹೊರಗೆ ಆಕೆಯನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಎಲ್ಲಾ ಮಕ್ಕಳು ವಿಷಯವನ್ನು ಅರಿತುಕೊಂಡರು ಹಾಗೂ ಮೆಟ್ಟಿಲನ್ನು ಏರುತ್ತಾ 1, 2, 3, 4…. ಎಂದು ಎಣಿಕೆಯನ್ನು ಪ್ರಾರಂಭಿಸಿದರು ಹಾಗೂ ಮೆಟ್ಟಿಲುಗಳಲ್ಲಿ ಇಳಿಯುತ್ತಾ ಹಿಮ್ಮೊಗವಾಗಿ ಎಣಿಕೆಯನ್ನು ಪ್ರಾರಂಭಿಸಿದರು. ಆಗ, ನಿರ್ದಿಷ್ಟ ಮೆಟ್ಟಿಲನ್ನು ತೋರಿಸಿ, ಮುಂದಿನ ಮತ್ತು ಹಿಂದಿನ ಸಂಖ್ಯೆಗಳನ್ನು ಸಹ ಗುರುತಿಸಲು ಯತ್ನಿಸಿದೆವು. ಉದಾಹರಣೆಗೆ, ಒಂದು ಮಗುವು ನಾಲ್ಕನೇ ಮೆಟ್ಟಿಲ ಮೇಲೆ ನಿಂತರೆ, ಉಳಿದ ಮಕ್ಕಳು ಮುಂದಿನ ಮೆಟ್ಟಿಲನ್ನು ಐದು ಎಂದು ಹಾಗೂ ಹಿಂದಿನ ಮೆಟ್ಟಿಲನ್ನು ಮೂರು ಎಂದು ಗುರುತಿಸುತ್ತಿದ್ದರು. ಉತ್ತರ ನೀಡುವುದಕ್ಕಾಗಿ ನಾವು ಒಮ್ಮತದಿಂದ ಒಂದು ವಿಧಾನವನ್ನು ರೂಪಿಸಿದ್ದೆವು – ಉತ್ತರ ತಿಳಿದಿರುವ ಮಕ್ಕಳು ತಮ್ಮ ಕೈಗಳನ್ನು ಎತ್ತಬೇಕು ಹಾಗೂ ಒಮ್ಮೆಗೆ ಒಬ್ಬರಿಗೆ ಮಾತ್ರವೇ ಉತ್ತರಿಸಲು ಅವಕಾಶ ನೀಡುವುದು. ಎಲ್ಲರಿಗೂ ಅವಕಾಶ ಸಿಗುವ ತನಕ ಈ ಆಟವನ್ನು ನಾವು ಆಡಿದೆವು. ರೂಬಿಯು ಇತರರಿಗಿಂತ ಭಿನ್ನವಾದ ವೇಗದಲ್ಲಿ ಕಲಿಯುತ್ತಿದ್ದರೂ ಸ್ವಯಂ ಕಲಿಕೆ ಮತ್ತು ಆಯ್ಕೆ ವಿಧಾನದ ಕುರಿತು ಆಕೆಯಲ್ಲಿ ಸ್ಪಷ್ಟತೆ ಇತ್ತು. ಅಲ್ಲದೆ ಪ್ರತಿಕ್ರಿಯಿಸುವುದಕ್ಕಾಗಿ ಸರಿಯಾದ ಕ್ಷಣಕ್ಕಾಗಿ ಆಕೆ ಕಾಯುತ್ತಿದ್ದಂತೆ ಕಂಡಿತು. ವಿಷಯ ತಜ್ಞೆಯಾಗಿ, ಈ ತರಗತಿಯು ನನಗೆ ಒಳಗೊಳ್ಳುವ ಸಮನ್ವಯ ತರಗತಿ (inclusive classroom) ಅಥವಾ ತರಗತಿಯಲ್ಲಿ ಸಮನ್ವಯ ಶೈಕ್ಷಣಿಕ ವಿಧಾನವನ್ನು (inclusive educational Method) ವಿನ್ಯಾಸಗೊಳಿಸಲು ಪ್ರಾಯೋಗಿಕ ಅನುಭವವನ್ನು ನೀಡಿತು. ರೂಬಿಯು 'ಏರಿಕೆ ಇಳಿಕೆ ಕ್ರಮ!' ಎಂದು ಹೇಳಿದ ಕ್ಷಣದಿಂದ ಶಿಕ್ಷಕರು ಮತ್ತು ತರಗತಿಯ ಉಳಿದ ವಿದ್ಯಾರ್ಥಿಗಳು ಆಕೆಯನ್ನು ಕಾಣುತ್ತಿದ್ದ ದೃಷ್ಟಿಕೋನವೇ ಬದಲಾಯಿತು.

ಈ ದಿನವು ಕಲಿಕೆಯ ಒಂದು ಮೂರ್ತ ರೂಪದ ಸದ್ಬಳಕೆಯ ಕಾರಣ ಮೋಜಿನಿಂದ ಕೂಡಿತ್ತು ಮಾತ್ರವಲ್ಲದೆ ಸಾಕಷ್ಟು ತೃಪ್ತಿಯನ್ನೂ ನೀಡಿತು. ಇತಿಹಾಸದುದ್ದಕ್ಕೂ, ಕಲಿಕೆ, ಅರ್ಥ ಮಾಡಿಕೊಳ್ಳುವುದು ಮತ್ತು ಜ್ಞಾನದ ನಿರ್ಮಾಣ ಇತ್ಯಾದಿಗಳು ಒತ್ತಡ ರಹಿತ, ಶಾಂತಿಯುತ ಮತ್ತು ಆರಾಮದಾಯಕ ಪರಿಸರದಲ್ಲಿ ಉಂಟಾಗುತ್ತವೆ ಎಂದು ಸಂಶೋಧಕರು ಹೇಳಿದ್ದಾರೆ. ಮಾನಸಿಕ ಆರೋಗ್ಯ ಅಥವಾ ಸಾಮಾಜಿಕ ಮತ್ತು ಭಾವನಾತ್ಮಕ ಯೋಗಕ್ಷೇಮವು ಜ್ಞಾನ ನಿರ್ಮಾಣದ ಗುಣಮಟ್ಟ ಮತ್ತು ವೇಗದೊಂದಿಗೆ ನೇರ ಸಂಬಂಧವನ್ನು ಹೊಂದಿದೆ ಎಂದು ನಾನು ಹೇಳಬಲ್ಲೆ. ಉಜ್ಜಿನಿಯ ಗ್ರಾಮ ಪಂಚಾಯತಿ ಗ್ರಂಥಾಲಯದಲ್ಲಿ ಕಂಡು ಬಂದ ಕ್ರಿಯಾಶೀಲತೆ ಮತ್ತು ಮೋಜನ್ನು ನೋಡಿ, ಆ ಜಿಲ್ಲೆಯ ಅನೇಕ ಗ್ರಂಥಾಲಯಗಳು ಈ ಮಾದರಿಯನ್ನು ಕಾರ್ಯರೂಪಕ್ಕೆ ತಂದವು ಹಾಗೂ ಸಮಗ್ರ ಕಲಿಕೆಯ ಈ ಪ್ರಕ್ರಿಯೆಯಲ್ಲಿ ಅಭಿವೃದ್ಧಿ ಸಾಧಿಸಿದವು. ಗ್ರಾಮ ಪಂಚಾಯತಿ ಗ್ರಂಥಾಲಯಗಳ ಸುತ್ತಲಿನ ಕಲಿಕಾ ತಂಡಗಳನ್ನು ಗ್ರಾಮ ಪಂಚಾಯತಿ ಗ್ರಂಥಾಲಯ ಕಲಿಕಾ ಘಟಕಗಳೆಂದು (Gram Panchayat Library Learning Units) ಕರೆಯಲಾಗುತ್ತದೆ. ಶಾಲಾ ಚಟುವಟಿಕೆಗಳು ಪ್ರಾರಂಭ–ಗೊಂಡಿದ್ದರೂ, ಈಗಲೂ ಇವು ಈ ಕಾರ್ಯವನ್ನು ಮುಂದುವರಿಸಿವೆ. ಈಗ ಈ ತರಗತಿಗಳು ನಿರ್ದಿಷ್ಟ ದಿನಗಳಲ್ಲಿ ಮಾತ್ರವೇ ನಡೆಯುತ್ತಿದ್ದು, ಶಿಕ್ಷಕರು ಮತ್ತು ಗ್ರಂಥಪಾಲಕರು ದಿನನಿತ್ಯದ ಕಾರ್ಯಕ್ರಮಗಳು ಮತ್ತು ಚಟುವಟಿಕೆಗಳಿಗೆ ಯೋಜನೆ ರೂಪಿಸುತ್ತಾರೆ. ತಮ್ಮ ಮಕ್ಕಳು ಇಂತಹ ಕಲಿಕಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದನ್ನು ಕಂಡು ಸಮುದಾಯಕ್ಕೂ ಸಂತಸವಾಗಿದೆ.

ರೂಬಿಯು ಈಗ ಗ್ರಂಥಾಲಯಕ್ಕೆ ನಿರಂತರವಾಗಿ ಭೇಟಿ ನೀಡುತ್ತಿದ್ದು, ಅಲ್ಲಿನ ಎಲ್ಲಾ ಪುಸ್ತಕಗಳನ್ನು ಓದುತ್ತಿದ್ದಾಳೆ ಎಂದು ಗ್ರಂಥಪಾಲಕರು ನನಗೆ ಹೇಳಿದರು. ರೂಬಿಗೆ ಓದುವುದರಲ್ಲಿ ಸಮಸ್ಯೆ ಇದ್ದರೂ, ಅವಳು ಪುಸ್ತಕಗಳಲ್ಲಿರುವ ಚಿತ್ರಗಳತ್ತ ಬೆರಳು ತೋರಿಸುತ್ತಾಳೆ ಹಾಗೂ ಅವುಗಳ ಸುತ್ತ ಕಥೆ ಹೆಣೆಯಲು ಯತ್ನಿಸುತ್ತಾಳೆ ಹಾಗೂ ಗ್ರಂಥಪಾಲಕರಿಗೆ ಅದನ್ನು ವಿವರಿಸಿ ಹೇಳುವುದನ್ನು ಆನಂದಿಸುತ್ತಾಳೆ.

ಆಕೆಯ ಶಾಲೆಗೆ ನಾನು ಭೇಟಿ ನೀಡಿದಾಗ, ಚಿತ್ರಗಳನ್ನು ನೋಡಿ ಕಥೆಗಳನ್ನು ಹೆಣೆಯುವುದರಲ್ಲಿ ರೂಬಿಯು ಆಸಕ್ತಿ ಬೆಳೆಸಿಕೊಂಡಿದ್ದಾಳೆ ಎಂದು ಶಿಕ್ಷಕರು ತಿಳಿಸಿದರು. ಅಲ್ಲದೆ ಆಕೆ ತರಗತಿಯ ಸಾಮಾನ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಆರಂಭಿಸಿದ್ದಾಳೆ. ನಿಧಾನವಾದರೂ, ಆಕೆ ಪ್ರತಿಕ್ರಿಯಿಸಲು ಇಚ್ಛಿಸುತ್ತಾಳೆ. ಗ್ರಂಥಾಲಯದ ಘಟನೆಯ ನಂತರ, ತರಗತಿಯ ಉಳಿದ ಮಕ್ಕಳು ಸಹ ರೂಬಿಯೊಂದಿಗೆ ಮಾತನಾಡಲು ಹಾಗೂ ಅವರ ಆಟದಲ್ಲಿ ಆಕೆಯನ್ನು ಸಹ ಒಳಗೊಳ್ಳಲು ಯತ್ನಿಸುತ್ತಿದ್ದಾರೆ ಎಂದು ಶಿಕ್ಷಕರು ತಿಳಿಸಿದರು. ಈಗ ರೂಬಿಗೆ ಗೆಳತಿಯರಿದ್ದಾರೆ. ಆಕೆ ಇತರರಂತೆಯೇ ಮಾತನಾಡುತ್ತಾಳೆ, ನಗುತ್ತಾಳೆ ಹಾಗೂ ಮಧ್ಯಾಹ್ನದ ಊಟದ ಅವಧಿಯಲ್ಲಿ ಕಾರಿಡಾರುಗಳಲ್ಲಿ ಓಡಾಡುತ್ತಾಳೆ.

ಮಾನವರಾದ ನಾವು ಪೂರ್ವಾಗ್ರಹವನ್ನು ಹೊಂದಿರುವುದು ಸಹಜ. ಆದರೆ ಓರ್ವ ಶಿಕ್ಷಕಿ ಅಥವಾ ವೃತ್ತಿಪರಳಾಗಿ ಪ್ರಜ್ಞಾಪೂರ್ವಕವಾಗಿ ಪಕ್ಷಪಾತವಿಲ್ಲದೆ ವರ್ತಿಸಬೇಕಾದುದು ನಮ್ಮ ಜವಾಬ್ದಾರಿಯಾಗಿದೆ. ಪ್ರತಿ ವಿದ್ಯಾರ್ಥಿಯೂ ವಿಭಿನ್ನ ಸಾಮರ್ಥ್ಯಗಳನ್ನು ಹೊಂದಿರುತ್ತಾಳೆ. ಈ ಸಾಮರ್ಥ್ಯಗಳ ಅಭಿವ್ಯಕ್ತಿಗೆ ಸರಿಯಾದ ಅವಕಾಶವನ್ನು ಮಾಡಿ ಕೊಡುವುದು ನಮ್ಮ ಜವಾಬ್ದಾರಿಯಾಗಿದೆ.

ಈ ಹಿಂದೆ, 'ರೂಬಿಯು ಮಾತನಾಡುವುದಿಲ್ಲ,' 'ರೂಬಿಗೆ ಏನೂ ಗೊತ್ತಿಲ್ಲ,' 'ಆಕೆ ನಮ್ಮ ಜೊತೆ ಆಟವಾಡುವುದಿಲ್ಲ' ಎಂದು ಹೇಳಿ ಆಕೆಯ ಶಿಕ್ಷಕರು ಮತ್ತು ಸಹಪಾಠಿಗಳು ನನ್ನ ಧೈರ್ಯಗೆಡಿಸುತ್ತಿದ್ದರು. ಇದನ್ನೆಲ್ಲ ಕೇಳಿದ ನಂತರ, ಆರಂಭದಲ್ಲಿ ನಾನೂ ಸಹ ರೂಬಿಗೆ ಸಂಬಂಧಿಸಿದಂತೆ ಪ್ರಜ್ಞಾಪೂರ್ವಕ ಪ್ರಯತ್ನವನ್ನು ಮಾಡುವುದನ್ನು ಬಿಟ್ಟುಬಿಟ್ಟೆ. ಏಕೆಂದರೆ, ರೂಬಿಗೆ ತರಗತಿಯ ಪ್ರಕ್ರಿಯೆಗಳಲ್ಲಿ ಆಸಕ್ತಿ ಇಲ್ಲ ಎಂದು ನಾನು ಸಹ ಭಾವಿಸಿದ್ದೆ. ಆದರೆ, ನನ್ನ ಮನಸ್ಸಿನಲ್ಲಿ ಈ ಪ್ರಶ್ನೆ ಉದ್ಭವಿಸಿತು: 'ತಮ್ಮನ್ನು ಒಳಗೊಂಡಿಲ್ಲ ಎಂದು ಮಕ್ಕಳು ಭಾವಿಸಿದಲ್ಲಿ ಸಮನ್ವಯ ಶಿಕ್ಷಣವನ್ನು ಅನುಷ್ಠಾನಗೊಳಿಸುವುದರಿಂದ ಉಂಟಾಗುವ ಪ್ರಯೋಜನವಾದರೂ ಏನು?' ನನ್ನ ಪ್ರಕಾರ, ತರಗತಿಯಲ್ಲಿ ಒಳಗೊಳ್ಳದೇ ಇರುವುದು, ವಿವಿಧ ಅಗತ್ಯತೆಗಳನ್ನು ಹೊಂದಿರುವ ವ್ಯಕ್ತಿಗೆ ಎದುರಾಗುವ ಮೊದಲ ಅಸಮಾನತೆಯಾಗಿದೆ. ಅಲ್ಲದೆ ಆ ಮಗುವು ಆ ಸಂದರ್ಭದಲ್ಲಿ ಅದನ್ನು ಗುರುತಿಸುವ ಮತ್ತು ತನ್ನ ಈ ಹಕ್ಕಿಗಾಗಿ ಹೋರಾಡುವ ಸ್ಥಿತಿಯಲ್ಲಿ ಇರುವುದಿಲ್ಲ. ಈ ನಿಟ್ಟಿನಲ್ಲಿ ಶಿಕ್ಷಕರ ಪಾತ್ರವು ಪ್ರಮುಖವಾದುದು. ಏಕೆಂದರೆ ಮಕ್ಕಳು ಶಾಲೆಯಲ್ಲಿ ತಮ್ಮ ಬದುಕಿನ ಹೆಚ್ಚಿನ ಸಮಯವನ್ನು ಅವರೊಂದಿಗೆ ಕಳೆಯುತ್ತಾರೆ. ಪ್ರಾಥಮಿಕ ಶಾಲಾ ಶಿಕ್ಷಕರ ಪಾತ್ರವು ಇನ್ನೂ ಪ್ರಮುಖವಾದುದು. ಏಕೆಂದರೆ ಮಕ್ಕಳ ಈ ಹಂತದಲ್ಲಿ ಮೂಲ ಮನೋಭಾವಗಳು ರೂಪುಗೊಳ್ಳುತ್ತವೆ. ಬದುಕಿನ ಈ ಹಂತದಲ್ಲಿ ಪೂರ್ವಾಗ್ರಹವನ್ನು ಎದುರಿಸಿದರೆ ವಿನಾಶಕಾರಿ ಪರಿಣಾಮಗಳು ಎದುರಾಗಬಹುದು. ರೂಬಿಯಂತಹ ಮಕ್ಕಳು ನಮ್ಮ ತರಗತಿಗಳ ಭಾಗವಾಗಿದ್ದಾರೆ ಹಾಗೂ ಕೋವಿಡ್ ಪಿಡುಗು ಪ್ರಾರಂಭಗೊಳ್ಳುವ ಮೊದಲು ಸಹ ಅಂತಹ ವಿದ್ಯಾರ್ಥಿಗಳಿದ್ದರು. ಈ ಪಿಡುಗು ಸಮಾಜೋ-ಭಾವನಾತ್ಮಕ ಯೋಗಕ್ಷೇಮದ ಕುರಿತು ಇನ್ನಷ್ಟು ಜಾಗೃತಿಯನ್ನು ರೂಪಿಸಿದ್ದು, ನಮ್ಮಲ್ಲಿ ಇನ್ನೂ ಹೆಚ್ಚಿನ ಸಹಾನುಭೂತಿಯನ್ನುಂಟು ಮಾಡಿದೆ. ರೂಬಿಯು ಈ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಸರಿಯಾದ ಅವಕಾಶಕ್ಕಾಗಿ ಕಾಯುತ್ತಿದ್ದಳು. ಒಬ್ಬ ಶಿಕ್ಷಕಿಯಾಗಿ, ಮಕ್ಕಳ ಕಲಿಕಾ ಮಟ್ಟಗಳನ್ನು ಪರಿಗಣಿಸದೆ, ತರಗತಿಯಲ್ಲಿ ಪ್ರತಿ ಮಗುವಿಗೂ ಅವಕಾಶಗಳನ್ನು ಕಲ್ಪಿಸುವುದು ನಮ್ಮ ಮೂಲ ಜವಾಬ್ದಾರಿಯಾಗಿದೆ ಎಂಬುದನ್ನು ಇದು ತೋರಿಸಿಕೊಡುತ್ತದೆ.

ಮಗುವಿನ ಭಾವನಾತ್ಮಕ ಯೋಗಕ್ಷೇಮವು ಸಮಗ್ರ ಕಲಿಕೆಯ ಮೂಲ ಅಗತ್ಯತೆಯಾಗಿದ್ದು, ಸಮನ್ವಯ ಶಿಕ್ಷಣ ವಿನ್ಯಾಸವನ್ನು ಒಂದು ವಿಧಾನವಾಗಿ ಬಳಸಿಕೊಳ್ಳುವ ಮೂಲಕ ಇದನ್ನು ಸಾಧಿಸಬಹುದು ಎಂದು ಈ ತರಗತಿಯು ನನಗೆ ತೋರಿಸಿ ಕೊಟ್ಟಿತು. ಹೀಗಾಗಿ ಸಮನ್ವಯ ಶಿಕ್ಷಣವು ಒಂದು ಪ್ರಕ್ರಿಯೆಯಾಗಿದೆಯೇ ಹೊರತು ಗಮ್ಯ ಸ್ಥಾನವಲ್ಲ.

*ಮಕ್ಕಳ ಗುರುತನ್ನು ಗೌಪ್ಯವಾಗಿಡಲು ಅವರ ಹೆಸರುಗಳನ್ನು ಬದಲಾಯಿಸಲಾಗಿದೆ.



**ಮೈಥಿಲಿ ಕೆ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಕೊಪ್ಪಳ ಜಿಲ್ಲಾ ಸಂಸ್ಥೆಯ ಜಿಲ್ಲಾ ಸಂಯೋಜಕರಾಗಿದ್ದಾರೆ. ಮೈಸೂರು ವಿಶ್ವವಿದ್ಯಾಲಯದಿಂದ ಪ್ರಾಣಿಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಮಕ್ಕಳಿಗೆ ಮೂಲ ವಿಜ್ಞಾನವನ್ನು ಕಲಿಸುವುದು ಮತ್ತು ಅದರ ಸುತ್ತ ವ್ಯಾಪಿಸಿರುವ ತಪ್ಪು ಗ್ರಹಿಕೆಗಳನ್ನು ಹೋಗಲಾಡಿಸುವುದು ಅವರ ಆಸಕ್ತಿಯ ವಿಷಯಗಳಾಗಿವೆ. ಅವರನ್ನು maithily.k@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** | ಪರಿಶೀಲನೆ: **ನಾಗಮಣಿ ಎಸ್.ಎನ್.**

ಎಲ್ಲಿ ತನ್ನ ಕುರಿತು ಕಾಳಜಿ ವಹಿಸಲಾಗುತ್ತಿದೆ ಎಂದು ಪ್ರತಿಯೊಬ್ಬರೂ ಭಾವಿಸುತ್ತಾರೋ ಹಾಗೂ ವಿವಿಧ ಹಿನ್ನೆಲೆಗಳು ಮತ್ತು ಅಭಿಪ್ರಾಯಗಳಿಗೆ ಅವರನ್ನು ಒಡ್ಡಲಾಗುತ್ತದೆಯೋ, ಸಹಕಾರ ಮತ್ತು ಸಹಯೋಗ ಹೊಂದಿರುವ ಅಂತಹ ಸಮನ್ವಯ ಪರಿಸರದಲ್ಲಿ, ಸಾಮಾಜಿಕವಾಗಿ ಮತ್ತು ಕಲಿಕಾ ಪ್ರಕ್ರಿಯೆಯಾಗಿ ಉತ್ತಮ ಕಲಿಕೆಯು ಸಾಧ್ಯವೆನಿಸುತ್ತದೆ.

ಸುರೇಶ್ ಸಾಹು, ಶಾಲೆಯಲ್ಲಿ ಸಾಂವಿಧಾನಿಕ ಮೌಲ್ಯಗಳು । ಸದ್ಭಾವನಾ ಶಾಲಾ ಕಾರ್ಯಕ್ರಮ, ಪು 28